## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2069 |
| 2 | ಸದಸ್ಯರ ಹೆಸರು | : | ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 17-03-2022 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪೊಲೀಸ್ ಇಲಾಖೆಯಲ್ಲಿ ಅನುಕಂಪ ಆಧಾರದ ಮೇಲೆ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು? | ಪೊಲೀಸ್ ಇಲಾಖೆಯಲ್ಲಿ ಕಳೆದ 03 ವರ್ಷಗಳಲ್ಲಿ ಗ್ರೂಪ್ ಸಿ ಮತ್ತು ಡಿ ವೃಂದದ ಹುದ್ದೆಗಳಿಗೆ ಅನುಕಂಪ ಆಧಾರದ ನೆಲೆಯಲ್ಲಿ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿರುವವರ ಸಂಖ್ಯಾವಾರು ವಿವರ ಕೆಳಕಂಡಂತಿದೆ.<br><br>ಕ್ರ ಸಂ \| 2019 \| 2020 \| 2021 \| 2022<br>1 \| 219 \| 283 \| 309 \| 34 |
| ಆ) | ಸದರಿ ಇಲಾಖೆಯು ಅನುಕಂಪದ ಆಧಾರದ ಮೇಲೆ ಉದ್ಯೋಗ ನೀಡುವಲ್ಲಿ ವಿಳಂಬ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ಮೃತರಾದ ಅಧಿಕಾರಿ/ ಸಿಬ್ಬಂದಿಗಳ ಅವಲಂಬಿತ ಕುಟುಂಬ ಸದಸ್ಯರು ಅನುಕಂಪದ ಆಧಾರದ ನೇಮಕಾತಿ ಕೋರಿ ಸಲ್ಲಿಸುತ್ತಿರುವ ಮನವಿಗಳನ್ನು ಯಾವುದೇ ವಿಳಂಬಕ್ಕೆ ಆಸ್ಪದ ನೀಡದೆ ಕೆ.ಸಿ.ಎಸ್ (ಅನುಕಂಪದ ಆಧಾರದ ನೇಮಕಾತಿ) ನಿಯಮಗಳು 1996 ಹಾಗೂ ಕೆ.ಸಿ.ಎಸ್ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಅನುಸಾರ ಪರಿಶೀಲಿಸಿ ಅರ್ಹತೆಯ ಅನುಸಾರ/ಅರ್ಹರಾಗಿರುವ ಪ್ರಕರಣಗಳಲ್ಲಿ ಇಲಾಖೆಯಲ್ಲಿನ ಗ್ರೂಪ್ ಸಿ ಮತ್ತು ಡಿ ದರ್ಜೆಯ ರಿಕ್ತಸ್ಥಾನಗಳಿಗೆ ಹಂಚಿಕೆ ಮಾಡಿ ನೇಮಕಾತಿ ಆದೇಶಗಳನ್ನು ನೀಡಲಾಗುತ್ತಿದೆ. ಅಲ್ಲದೆ ಇಲಾಖೆಯಲ್ಲಿ ಗ್ರೂಪ್ ಸಿ ಮತ್ತು ಡಿ ದರ್ಜೆಯ ರಿಕ್ತಸ್ಥಾನಗಳು ಲಭ್ಯವಿಲ್ಲದಿದ್ದಾಗ ಸರ್ಕಾರದ ನಿರ್ದೇಶನದಂತೆ ಅರ್ಜಿದಾರರ ನೇಮಕಾತಿ ಪ್ರಸ್ತಾವನೆಗಳನ್ನು ಸಂಬಂಧಪಟ್ಟ ಪ್ರಾದೇಶಿಕ ಆಯುಕ್ತರುಗಳಿಗೆ ಸಹಾ ಶಿಫಾರಸ್ಸು ಮಾಡಿ ಕಳುಹಿಸಲಾಗುತ್ತದೆ.<br>ಆದಾಗ್ಯೂ ನಿಯಮಗಳಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಸಲ್ಲಿಸದ ಪ್ರಯುಕ್ತ ಹಾಗೂ ಅನುಕಂಪದ ನೇಮಕಾತಿ ಪರಿಗಣನೆಗೆ ಅಗತ್ಯ ದಾಖಲಾತಿ ಸಲ್ಲಿಸದ ಪ್ರಯುಕ್ತ (ಅಪೂರ್ಣ ಮಾಹಿತಿ) ಹಾಗೂ ಈ ಕುರಿತು ದಾಖಲಾತಿಗಳನ್ನು ಪಡೆಯುವ ಪತ್ರವ್ಯವಹಾರಗಳಿಂದಾಗಿ ಉದ್ಯೋಗ ನೀಡುವಲ್ಲಿ ವಿಳಂಬವಾಗುತ್ತದೆ. ಅರ್ಜಿದಾರರಿಗೆ ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿದ ಕಾಲಾವಧಿ, ನಮೂನೆ ಇತ್ಯಾದಿ ಸಂಪೂರ್ಣ ಮಾಹಿತಿ ನೀಡಿ ದಾಖಲಾತಿಗಳನ್ನು ಒದಗಿಸುವಂತೆ ಸೂಚಿಸಿ ಮಾರ್ಗದರ್ಶನ ನೀಡುವಂತೆ ಸಂಬಂಧಪಟ್ಟ ಘಟಕಾಧಿಕಾರಿಗಳಿಗೆ ಚೆಕ್‌ಲಿಸ್ಟ್ ಗಳನ್ನು ನಿಗಧಿಪಡಿಸಿ ಸೂಚನೆಗಳನ್ನು ಆಗಿಂದಾಗ್ಗೆ ನಿರಂತರವಾಗಿ ನೀಡಲಾಗುತ್ತಿದೆ. |
| ಇ) | ಬಂದಿದ್ದಲ್ಲಿ, ಈ ಕುರಿತಂತೆ ಸರ್ಕಾರವು ತೆಗೆದುಕೊಂಡ ಕ್ರಮವೇನು? (ವಿಸ್ತೃತವಾದ ಮಾಹಿತಿ ನೀಡುವುದು) | |

ಸಂಖ್ಯೆ: ಒಇ 48 ಪಿಇಎಂ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು